CPMG / KA / BG-GPO/13 / 2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೨೪, ೨೦೦೫ (ಫಾಲ್ಗುಣ ೫, ಶಕ ವರ್ಷ ೧೯೨೬) | ಸಂಚಿಕೆ ೮ |
|---|---|---|



## ಭಾಗ-೪-ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ವಾಪ್ರಯು 84 ಪಿಐಎಫ್ 2004, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2005**

ಶ್ರೀ ಕಂಠೀರವ ಸ್ಟುಡಿಯೋಸ್ ಲಿಮಿಟೆಡ್ ನಿಯಮಾವಳಿಗಳು 75(ಎ) ಅನುಚ್ಛೇದದಿಂದ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು, ಕರ್ನಾಟಕ ಸರ್ಕಾರವು ಶ್ರೀ ಬಿ. ಶಿವರಾಂ, ವಾರ್ತಾ ಸಚಿವರು ಇವರನ್ನು ತಕ್ಷಣದಿಂದ ಅನ್ವಯವಾಗುವಂತೆ ಶ್ರೀ ಕಂಠೀರವ ಸ್ಟುಡಿಯೋಸ್ ಲಿಮಿಟೆಡ್‌ನ ನಿರ್ದೇಶಕರ ಮಂಡಳಿಯಲ್ಲಿ ನಿರ್ದೇಶಕರನ್ನಾಗಿ ನಾಮ ನಿರ್ದೇಶನ ಮಾಡಿ ಇದೇ ನಿಯಮಾವಳಿಗಳ 86(ಕೆ) ಅನುಚ್ಛೇದದಿಂದ ಪ್ರದತ್ತವಾದ ಅಧಿಕಾರದನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಇವರನ್ನು ಶ್ರೀ ಕಂಠೀರವ ಸ್ಟುಡಿಯೋಸ್ ಲಿಮಿಟೆಡ್‌ನ ಅಧ್ಯಕ್ಷರನ್ನಾಗಿ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಸ್. ಸೀತಮ್ಮ

ಪಿ.ಆರ್. 55

ಸರ್ಕಾರದ ಅಧೀನ ಕಾರ್ಯದರ್ಶಿ,

ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

**ಅಧಿಸೂಚನೆ ಸಂಖ್ಯೆ: ವಾಪ್ರಯು 69 ಪಿಐಎಫ್ 2004, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2005**

ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತದ ನಿಯಮಾವಳಿಗಳ 100ನೇ ಅನುಚ್ಛೇದದನ್ವಯ ಕರ್ನಾಟಕ ಸರ್ಕಾರವು ಡಾ: ಸಿ.ಎಸ್. ಕೇದಾರ್, ಐ.ಎ.ಎಸ್., ಪ್ರಧಾನ ಕಾರ್ಯದರ್ಶಿಗಳು, ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ ಇವರನ್ನು ಶ್ರೀ ವಾಸುದೇವ್, ಅಧ್ಯಕ್ಷರು, ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮ ಇವರ ಸ್ಥಾನದಲ್ಲಿ ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮದ ಅಧ್ಯಕ್ಷರನ್ನಾಗಿ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಸ್. ಸೀತಮ್ಮ

ಪಿ.ಆರ್. 56

ಸರ್ಕಾರದ ಅಧೀನ ಕಾರ್ಯದರ್ಶಿ,

ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**NOTIFICATION No. DPAR 330 SAS 2003 (Part), Bangalore, dated: 4th February 2005**

The Notification No.13017/32/2003-AIS(I) dated 24.01.2005 of Government of India, Department of Personnel & Training, New Delhi is hereby republished.

**PART-I SESSION-2**
**No.13017/32/2003-AIS(I)**
**Government of India**
**Ministry of Personnel, Public Grievances & Pensions**
**(Department of Personnel & Training)**
**NOTIFICATION New Delhi, Dated: 24th January 2005**

In exercise of the powers conferred by sub-rule (2) of Rule 5 of the Indian Administrative Service (Cadre) Rules, 1954 and with the concurrence of the Government of Manipur-Tripura, Karnataka and Tamil Nadu, the Central Government hereby transfers Smt. Pooja Kulkarni, IAS (RR:03) from IAS Cadre of Karnataka and Shri R. Kirlosh Kumar, IAS (RR:2001) from IAS Cadre of Manipur-Tripura to the IAS Cadre of Tamil Nadu (third cadre) with immediate effect.

**K.K. SHARMA**
Desk Officer
By Order and in the name of the Governor of Karnataka,
**K. SUDHAKARA SHETTY**
P.R. 51 Under Secretary to Government, DPAR (Services-1).

**ಕಂದಾಯ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಕಂಇ 02 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2005**

ಧೂಪದಗಿರಿ ಬಯೋಟೆಕ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ತೂಬುಗೆರೆ ಹೋಬಳಿ, ಶ್ರೀನಿವಾಸಪುರ ಗ್ರಾಮದ ಸರ್ವೆ ನಂ.38 ರಲ್ಲಿ 19.00 ಎಕರೆ ಜಮೀನನ್ನು ಪುಷ್ಪಾಭಿವೃದ್ಧಿ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್/ಎಸ್‌ಆರ್/3/2004-05, ದಿನಾಂಕ: 14.07.2004 ರಂದು ಸರ್ಕಾರದ ಕಾರ್ಯದರ್ಶಿಗಳು, ತೋಟಗಾರಿಕೆ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿದ್ದು, ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1) (V) ಅಡಿ ವಿನಾಯ್ತಿ ನೀಡಲು ಕೃಷಿ ಮತ್ತು ತೋಟಗಾರಿಕೆ ಇಲಾಖೆಯವರು ಏಕಗವಾಕ್ಷಿ ಸಮಿತಿಯ ಅನುಮೋದನೆ ಪಡೆದು ಸದರಿ ಸಂಸ್ಥೆಯ ಉದ್ದೇಶಿತ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ ನಿಯಮ 38-ಬಿ (5) (ಸಿ) (I) (II) (1) ಅಡಿಯಲ್ಲಿ ಅಂಗೀಕಾರಾರ್ಹವಾದ ಚಟುವಟಿಕೆಯಾಗಿರುತ್ತದೆ. ಆದ್ದರಿಂದ, ಇದಕ್ಕೆ ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ಅನುಮತಿಸಬಹುದಾಗಿರುತ್ತದೆ ಎಂಬುದಾಗಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ, ಬೆಂಗಳೂರು ಇವರಲ್ಲಿ ದಿನಾಂಕ: 20.02.2004 ರಂದು ನೋಂದಾಯಿಸಲ್ಪಟ್ಟಿದೆ. ಅರ್ಜಿದಾರರು ಪ್ರಾಜೆಕ್ಟ್ ವರದಿಯನ್ನು ಸಲ್ಲಿಸಿದ್ದು ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪಿ.ಟಿ.ಸಿ.ಎಲ್. ಕಾಯ್ದೆಗೆ ಒಳಪಡುವುದಿಲ್ಲ. ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1) (V)ರ ಪ್ರಕಾರ ತೋಟಗಾರಿಕೆ ಉದ್ದೇಶಕ್ಕೆ 20 ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995ರ ಕಲಂ 109(1) (V) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-ಬಿ(5) (ಎ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ತೂಬುಗೆರೆ ಹೋಬಳಿ, ಶ್ರೀನಿವಾಸಪುರ ಗ್ರಾಮದ ಸರ್ವೆ ನಂ.38 ರಲ್ಲಿ 19.00 ಎಕರೆ ಜಮೀನನ್ನು ಧೂಪದಗಿರಿ ಬಯೋಟೆಕ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರು ಪುಷ್ಪಾಭಿವೃದ್ಧಿ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1) (V) ಅಡಿ ವಿನಾಯ್ತಿ ನೀಡಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:-

(1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷ ಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

(2) ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956 ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

(3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

(4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿ ಸತಕ್ಕದ್ದು.

(5) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ನೀಡಲು ಮಾತ್ರವಾಗಿರುತ್ತದೆ. ಇತರೆ ಯಾವುದೇ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶ ವಿರುತ್ತದೆ.

(6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದ ವಶಕ್ಕೆ ತೆಗೆದು ಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಕೆ. ನರಸಿಂಹಮೂರ್ತಿ**

ಪಿ.ಆರ್. 57 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ)

**ಅಧಿಸೂಚನೆ ಸಂಖ್ಯೆ: ಕಂಇ 44 ಎಲ್‌ಆರ್‌ಎಂ 2004, ಬೆಂಗಳೂರು, ದಿನಾಂಕ: 28ನೇ ಜನವರಿ 2005**

ಅಂತರ ರಾಷ್ಟ್ರೀಯ ಕೃಷ್ಣಾ ಪ್ರಜ್ಞಾ ಸಂಘ (ಇಸ್ಕಾನ್), ತಿಲಕವಾಡಿ, ಬೆಳಗಾವಿ ಇವರು ಬೆಳಗಾವಿ ಜಿಲ್ಲೆ, ಖಾನಾಪುರ ತಾಲ್ಲೂಕು, ಗವಸೆ ಗ್ರಾಮದ ಸ.ನಂ.11/1, 12/3 ಹಾಗೂ ಚಿಕಾಲೆ ಗ್ರಾಮದ ಸ.ನಂ.60 ರಲ್ಲಿ ಒಟ್ಟು 453.25 ಎಕರೆ ಜಮೀನನ್ನು ಸ್ವಯಂ ಸಂಪೂರ್ಣತೆಯ ಈಕೋ ಗ್ರಾಮ ಯೋಜನೆಯ ಉದ್ದೇಶಕ್ಕಾಗಿ ಖರೀದಿಸುವ ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಕಂಇ/ಭೂಸು/ವಿವ/15/2002-03, ದಿನಾಂಕ: 08.11.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರುಗಳಲ್ಲಿ ಒಟ್ಟು 453.25 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1-ಎ) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ, 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು, ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ, ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು, ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ರ ಅವಕಾಶಗಳಿಂದ ವಿನಾಯ್ತಿ ನೀಡಲು ಸದರಿ ಅಧಿನಿಯಮದ ಕಲಂ 109(1-ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ, 1995ರ ಕಲಂ 109(1-ಎ) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಅಂತರ ರಾಷ್ಟ್ರೀಯ ಕೃಷ್ಣಾ ಪ್ರಜ್ಞಾ ಸಂಘ (ಇಸ್ಕಾನ್), ತಿಲಕವಾಡಿ, ಬೆಳಗಾವಿ ಇವರು ಬೆಳಗಾವಿ ಜಿಲ್ಲೆ, ಖಾನಾಪುರ ತಾಲ್ಲೂಕು, ಗವಸೆ ಗ್ರಾಮದ ಸ.ನಂ.11/1, 12/3 ಹಾಗೂ ಚಿಕಾಲೆ ಗ್ರಾಮದ ಸ.ನಂ.60 ರಲ್ಲಿ ಒಟ್ಟು 453.25 ಎಕರೆ ಜಮೀನನ್ನು ಸ್ವಯಂ ಸಂಪೂರ್ಣತೆಯ ಈಕೋ ಗ್ರಾಮ ಯೋಜನೆಯ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1-ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:-

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ / ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯ್ತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ / ಅಭಿವೃದ್ಧಿ ಪ್ರಾಧಿಕಾರ / ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ನರಸಿಂಹಮೂರ್ತಿ**

ಪಿ.ಆರ್. 58 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ).

## ಸಹಕಾರ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 10 ಸಿಎಸ್‌ಎಸ್ 2005, ಬೆಂಗಳೂರು, ದಿನಾಂಕ: 20ನೇ ಜನವರಿ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 63 ಎಸ್‌ಎಂಎಸ್ 2000, ದಿನಾಂಕ: 14.09.2001 ರಲ್ಲಿ ಕರ್ನಾಟಕ ರಾಜ್ಯ ಸಹಕಾರ ಗ್ರಾಹಕರ ಮಹಾಮಂಡಳ ನಿ.. ಚಾಮರಾಜಪೇಟೆ, ಬೆಂಗಳೂರು ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಎಸ್.ಸಿ. ಬಸವರಾಜು, ಸಾತನೂರು, ಕನಕಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಎಸ್. ಶ್ರೀವತ್ಸ, ನಂ.547, 42ನೇ ಅಡ್ಡ ರಸ್ತೆ, 8ನೇ ಬಡಾವಣೆ, ಜಯನಗರ, ಬೆಂಗಳೂರು-82 ಇವರನ್ನು ಕರ್ನಾಟಕ ರಾಜ್ಯ ಸಹಕಾರ ಗ್ರಾಹಕರ ಮಹಾಮಂಡಳ ನಿ. ಚಾಮರಾಜಪೇಟೆ, ಬೆಂಗಳೂರು ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಜಾಪಾಲಿ**

ಪಿ.ಆರ್. 59 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 15 ಸಿಎನ್‌ಎಸ್ 2005, ಬೆಂಗಳೂರು, ದಿನಾಂಕ: 28ನೇ ಜನವರಿ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 03 ಎನ್‌ಎಂಎಸ್ 2004, ದಿನಾಂಕ: 21.01.2004 ಉತ್ತರ ಕನ್ನಡ ಜಿಲ್ಲೆ ಸಿದ್ದಾಪುರ ತಾಲ್ಲೂಕಿನ ಇಟಗಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, ಇಟಗಿ, ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಉತ್ತರ ಕನ್ನಡ ಜಿಲ್ಲೆ, ಸಿದ್ದಾಪುರ ತಾಲ್ಲೂಕಿನ ಇಟಗಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, ಇಟಗಿ, ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಅ. ಶ್ರೀ ರಾಮಕೃಷ್ಣ ಮಹದೇವ ಹರಿಜನ, ಇಟಗಿ ಗ್ರಾಮ, ಸಿದ್ದಾಪುರ ತಾಲ್ಲೂಕು.

ಆ. ಶ್ರೀ ಸೀತಾರಾಮ ರಾಮಚಂದ್ರ ಭಟ್, ಇಟಗಿ ಗ್ರಾಮ, ಸಿದ್ದಾಪುರ ತಾಲ್ಲೂಕು.

ಇ. ಶ್ರೀಮತಿ ಕಲ್ಯಾಣಿ ಕೋಂ ಗಣಪತಿ ಭಂಡಾರಿ, ಇಟಗಿ ಗ್ರಾಮ, ಸಿದ್ದಾಪುರ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 60 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**FOOD, CIVIL SUPPLIES AND CONSUMER AFFAIRS SECRETARIAT**

**NOTIFICATION No. FCS 88 EBT 2004, Bangalore, dated: 15th February 2005**

The draft of the following rules further to amend The Standards of Weights and Measures (Enforcement) Rules, 1988 which the Government of Karnataka proposes to make in exercise of the powers conferred by Section 72 of The Standards of Weights and Measures (Enforcement) Act, 1985 (Central Act 54 of 1985), and as directed by the Government of India in letter No. wm-9(4)/103, dated: 24.3.2004 of the Ministry of Consumer Affairs and Public Distribution, Krishi Bhavan, New Delhi, is hereby published as required by sub-section (4) of the said Section for the information of persons likely to be affected thereby and notice is hereby given that the said draft will be taken into consideration after thirty days from the date of its publication in the Official Gazette.

Any objections or suggestions, which may be received by the State Government from any person with respect to the said draft before the expiry of the period specified above, will be considered by the State Government. Objections and suggestions may be addressed to the Principal Secretary to Government, Food, Civil Supplies and Consumer Affairs Department, 7th Floor, M.S. Building, Dr. Ambedkar Veedhi, Bangalore-560 001.

**DRAFT RULES**

**1. Short title and commencement.-** (1) These rules may be called The Karnataka Standards of Weights and Measures (Enforcement) (Amendment) Rules, 2004,

(2) They shall come into force from the date of their publication in the Official Gazette.

**2. Amendment of Rule 14.-** In rule 14 of the Karnataka Standards of Weights and Measures (Enforcement) Rules, 1988 (hereinafter referred to as the said rules), after the proviso of sub-rule (1), the following proviso shall be inserted, namely:-

"Provided further that for the fibre or plastic or steel tape measure, no re-verification shall be required."

**3. Amendment of Schedule XII.-** In item 3 of the Schedule XII of the said rules, for sub-item (b) and entries relating thereto, the following shall be substituted, namely:-

"(b) Flexible measures

| | |
|---|---|
| class I | 20 paise per metre |
| class II | 15 paise per metre |
| class III | 10 paise per metre." |

By Order and in the name of the Governor of Karnataka,

**N. VENKATACHALAPATHY**

P.R. 61 Under Secretary to Government,

Food, Civil Supplies and Consumer Affairs Department.

**ಕಾನೂನು ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಲಾ 22 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2005**

ಕುಟುಂಬ ನ್ಯಾಯಾಲಯಗಳ ಅಧಿನಿಯಮ 1984ರ ಸೆಕ್ಷನ್-4 (ಕೇಂದ್ರ ಅಧಿನಿಯಮ 1984ರ ಸಂಖ್ಯೆ: 66) ರಡಿಯಲ್ಲಿ ಪ್ರದತ್ತವಾದ ಅಧಿಕಾರದನ್ವಯ ಮತ್ತು ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ (1) :1:2005 ದಿನಾಂಕ: 13.1.2005 ರಲ್ಲಿ ಪ್ರಸ್ತಾಪಿಸಿರುವಂತೆ ಕರ್ನಾಟಕ ಸರ್ಕಾರವು ಶ್ರೀ ಎ.ವಿ. ಚಂದ್ರಶೇಖರ್, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉಡುಪಿ ಇವರನ್ನು ಪ್ರಧಾನ ನ್ಯಾಯಾಧೀಶರು, ಕುಟುಂಬ ನ್ಯಾಯಾಲಯ, ಬೆಂಗಳೂರು ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 62 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಅಧಿಸೂಚನೆ ಸಂಖ್ಯೆ: ಲಾ 23 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2005**

ಕುಟುಂಬ ನ್ಯಾಯಾಲಯಗಳ ಅಧಿನಿಯಮ 1984ರ ಸೆಕ್ಷನ್-4 (ಕೇಂದ್ರ ಅಧಿನಿಯಮ 1984ರ ಸಂಖ್ಯೆ: 66) ರಡಿಯಲ್ಲಿ ಪ್ರದತ್ತವಾದ ಅಧಿಕಾರದನ್ವಯ ಮತ್ತು ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ (1) :1:2004 ದಿನಾಂಕ: 11.1.2005 ರಲ್ಲಿ ಪ್ರಸ್ತಾಪಿಸಿರುವಂತೆ ಕರ್ನಾಟಕ ಸರ್ಕಾರವು ಅಧ್ಯಕ್ಷಾಧಿಕಾರಿ, 1ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಇವರನ್ನು ಅಧ್ಯಕ್ಷಾಧಿಕಾರಿ, ಕುಟುಂಬ ನ್ಯಾಯಾಲಯ, ಗುಲ್ಬರ್ಗಾ ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸಮವರ್ತಿಯಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 63 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಲೋಕೋಪಯೋಗಿ ಸಚಿವಾಲಯ**

**ಸಂಖ್ಯೆ: ಲೋಇ 1 ಸ್ವೀಮರ 2005, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2005**

**ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ದ 3ನೇ ಪ್ರಕರಣದ (ಬಿ) ಖಂಡದ ಅಡಿಯಲ್ಲಿ ವಿವರಣೆಗಳ ಪ್ರಕಟಣೆ**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು, 2002ರ 3ನೇ ನಿಯಮದೊಂದಿಗೆ ಓದಿಕೊಂಡ ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, 2000ದ 3ನೇ ಪ್ರಕರಣದ (ಬಿ) ಖಂಡದ ಅಡಿಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಲೋಕೋಪಯೋಗಿ ಇಲಾಖೆಗೆ ಸಂಬಂಧಿಸಿದ ವಿವರಗಳ ಪ್ರಕಟಣೆ.

**1. ರಚನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ಲೋಕೋಪಯೋಗಿ ಇಲಾಖೆಯು ಕರ್ನಾಟಕ ಸರ್ಕಾರದ ಸಚಿವಾಲಯದ ಇಲಾಖೆಯಾಗಿದ್ದು, ಇದು ಬೆಂಗಳೂರಿನ ಬಹುಮಹಡಿ ಕಟ್ಟಡದಲ್ಲಿ ಇದೆ. ಶ್ರೀ ಹೆಚ್.ಡಿ. ರೇವಣ್ಣ ಮಾನ್ಯ ಲೋಕೋಪಯೋಗಿ ಹಾಗೂ ಇಂಧನ ಸಚಿವರು ಇಲಾಖೆಯ ಪ್ರಭಾರವನ್ನು ಹೊಂದಿರುವರು. ಶ್ರೀ ಪಿ.ಬಿ. ಮಹಿಷಿ ಭಾ.ಆ.ಸೇ. ಇವರು ಇಲಾಖೆಯ ಪ್ರಧಾನ ಕಾರ್ಯದರ್ಶಿಯಾಗಿದ್ದು ಶ್ರೀ ಟಿ. ಸುಕುಮಾರ್ ಇವರು ಇಲಾಖೆಯ ಕಾರ್ಯದರ್ಶಿಯಾಗಿರುತ್ತಾರೆ. ಒಬ್ಬರು ಜಂಟಿ ಕಾರ್ಯದರ್ಶಿ, ಒಬ್ಬರು ಪ್ರಾಜೆಕ್ಟ್ ಕೋ-ಆರ್ಡಿನೇಟರ್, ಇಬ್ಬರು ಉಪ ಕಾರ್ಯದರ್ಶಿಗಳು, ಒಬ್ಬರು ಆಂತರಿಕ ಆರ್ಥಿಕ ಸಲಹೆಗಾರರು, ಒಬ್ಬರು ಕಾನೂನು ಕೋಶದ ಮುಖ್ಯಸ್ಥರು ಹಾಗೂ ಒಂಬತ್ತು ಅಧೀನ ಕಾರ್ಯದರ್ಶಿಗಳು, ಎಂಟು ಶಾಖಾಧಿಕಾರಿಗಳು ಮತ್ತು ಅನೇಕ ಸಮೂಹ-ಸಿ ಮತ್ತು ಡಿ ವರ್ಗದ ನೌಕರರು ಕಾರ್ಯನಿರ್ವಹಿಸುತ್ತಿದ್ದಾರೆ.

**ಇಲಾಖೆಯ ಪ್ರಕಾರ್ಯಗಳು ಈ ಮುಂದಿನಂತೆ ಇವೆ:**

ಇಲಾಖೆಗೆ ಹಂಚಿಕೆಯಾಗಿರುವ ಕಾರ್ಯಕಲಾಪಗಳು : ಲೋಕೋಪಯೋಗಿ ಇಲಾಖೆಯ ನಿಯಂತ್ರಣದಲ್ಲಿ ಈ ಕೆಳಕಂಡ ಇಲಾಖೆಗಳು: ಸಂಸ್ಥೆಗಳು ಬರುತ್ತವೆ:

| | |
|---|---|
| 1 | ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದ), ಬೆಂಗಳೂರು. |
| 2 | ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉ), ಧಾರವಾಡ. |
| 3 | ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು. |
| 4 | ಕರ್ನಾಟಕ ರಾಜ್ಯ ಹೆದ್ದಾರಿಗಳು ಅಭಿವೃದ್ಧಿ ಯೋಜನಾ ಅನುಷ್ಠಾನ ಘಟಕ, ಬೆಂಗಳೂರು. |
| 5 | ಮುಖ್ಯ ವಾಸ್ತುಶಿಲ್ಪ, ಬೆಂಗಳೂರು. |
| 6 | ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ, ಕಾರವಾರ. |
| 7 | ಕರ್ನಾಟಕ ರಸ್ತೆ, ಅಭಿವೃದ್ಧಿ ನಿಗಮ, ಬೆಂಗಳೂರು. |

ಈ ಎಲ್ಲಾ ಇಲಾಖೆ : ಸಂಸ್ಥೆಗಳ ಮೂಲಕ ಕಾರ್ಯಕಲಾಪಗಳನ್ನು ನಿರ್ವಹಿಸುತ್ತಿದ್ದು ಪ್ರಮುಖವಾಗಿ ಈ ಕೆಳಕಂಡ ವಿಷಯಗಳು ಲೋಕೋಪಯೋಗಿ ಇಲಾಖೆಯ ಕಾರ್ಯವ್ಯಾಪ್ತಿಯಲ್ಲಿ ಬರುತ್ತವೆ.

ಅ. ರಾಜ್ಯ ಸರ್ಕಾರಿ ಕಟ್ಟಡಗಳ ನಿರ್ಮಾಣ, ವಸತಿಗೃಹಗಳ ನಿರ್ಮಾಣ, ಅವುಗಳ ಉಸ್ತುವಾರಿ ಹಂಚಿಕೆ ಹಾಗೂ ಜಮೀನು ಕಾಪಾಡುವಿಕೆ.

ಆ. ವಿಶ್ವಬ್ಯಾಂಕ್, ಹುಡ್ಕೊ ಸಾಲದ ನೆರವಿನ ಯೋಜನೆಗಳು.

ಇ. ನಬಾರ್ಡ್ ಸಾಲ ಸಹಾಯಕ ಕಾಮಗಾರಿಗಳು.

ಈ. ರಾಷ್ಟ್ರೀಯ ಹೆದ್ದಾರಿಗಳ, ಸೇತುವೆಗಳ, "ಕೇಂದ್ರ ರಸ್ತೆ ನಿಧಿ" ಯೋಜನೆ ಅಡಿಯಲ್ಲಿನ ಕಾಮಗಾರಿಗಳ, ರಾಜ್ಯ ಹೆದ್ದಾರಿಗಳ, ಜಿಲ್ಲಾ ಮುಖ್ಯ ರಸ್ತೆಗಳ ನಿರ್ಮಾಣ ದುರಸ್ತಿ.

ಉ. ರಾಜ್ಯ ಬಂದರುಗಳ ನಿರ್ಮಾಣ, ದುರಸ್ತಿ, ಸಮುದ್ರ ಕೊರೆತ ತಡೆಗೋಡೆಗಳ ಬಗೆಗಿನ ವಿಷಯಗಳ ನಿರ್ವಹಣೆ.

ಊ. ಇಲಾಖೆಯ ಕೆಲಸಗಳಿಗೆ ಸಂಬಂಧಿಸಿದಂತೆ ಹಣ ಭರವಸೆ ಪತ್ರದ ವ್ಯವಹಾರಗಳು, ಆಯವ್ಯಯ, ಸಾರ್ವಜನಿಕ ಲೆಕ್ಕಪತ್ರ ಸಮಿತಿ, ವಿಷಯ ಸಮಿತಿ ಹಾಗೂ ಅಂದಾಜು ಸಮಿತಿ ವಿಷಯಗಳು ಹಾಗೂ ವಾರ್ಷಿಕ ವರದಿ.

ಖು. ಅಧೀಕ್ಷಕ ಇಂಜಿನಿಯರ್, ಕಾರ್ಯಪಾಲಕ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಹಾಯಕ ಇಂಜಿನಿಯರ್, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಕಿರಿಯ ಇಂಜಿನಿಯರ್ ಹಾಗೂ ಲಿಪಿಕ ನೌಕರರ ಸಿಬ್ಬಂದಿ ವರ್ಗಕ್ಕೆ ಸೇರಿದ ಅಧಿಕಾರಿ : ನೌಕರರ ಸೇವಾ ವಿಷಯಗಳು, ಇವುಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಕರ್ನಾಟಕ ಉಚ್ಚ ನ್ಯಾಯಾಲಯ, ಭಾರತದ ಸರ್ವೋಚ್ಚ ನ್ಯಾಯಾಲಯದ ಮುಂದೆ ವ್ಯವಹರಿಸತಕ್ಕಂತಹ ವಿಷಯಗಳು.

ಖೂ. ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳು.

ಎ. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಡಿಯಲ್ಲಿ ಬರುವವರನ್ನು ಹೊರತುಪಡಿಸಿ ಇಲಾಖೆಯ ಆಡಳಿತ ನಿಯಂತ್ರಣದಲ್ಲಿರುವ ಅಧಿಕಾರಿಗಳ : ಸಿಬ್ಬಂದಿ ವರ್ಗದವರ ನೇಮಕಾತಿ : ನಿಯೋಜನೆ : ವರ್ಗಾವಣೆಗಳು ಇತ್ಯಾದಿ ಸೇವಾ ವಿಷಯಗಳು.

2. ಅಧಿಕಾರಿಗಳ ಮತ್ತು ನೌಕರರ ಕರ್ತವ್ಯಗಳು ಮತ್ತು ಅವರುಗಳು ನಿರ್ವಹಿಸುವ ವಿಷಯ ಕೆಳಕಂಡಂತಿವೆ:

**ಗ್ರೂಪ್-ಎ ಅಧಿಕಾರಿಗಳ ಹೆಸರು ಮತ್ತು ಕೆಲಸದ ಹಂಚಿಕೆ**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪದನಾಮ | ಅವರು ನಿರ್ವಹಿಸುವ ವಿಷಯಗಳು | ದೂರವಾಣಿ ಸಂಖ್ಯೆ |
|---|---|---|---|
| | **ಶ್ರೀಯುತರು:** | | |
| 1 | ಪಿ.ಬಿ. ಮಹಿಷಿ,<br>ಸರ್ಕಾರದ ಪ್ರಧಾನ ಕಾರ್ಯದರ್ಶಿ | ಇಲಾಖೆಯ ಎಲ್ಲಾ ವಿಷಯಗಳ ಪ್ರಭಾರ | 22258928 (0)<br>22251449 (0)<br>22092917 (0)<br>23416312 (ಆರ್) |
| 2 | ಟಿ. ಸುಕುಮಾರ್,<br>ಸರ್ಕಾರದ ಕಾರ್ಯದರ್ಶಿ | ಇಲಾಖೆಯ ಎಲ್ಲಾ ವಿಷಯಗಳ ಪ್ರಭಾರ | 22251548 (0)<br>22092164 (0)<br>25262450 (ಆರ್) |
| 3 | (ಜಂಟಿ ಕಾರ್ಯದರ್ಶಿ) | ನಬಾರ್ಡ್ ಹಾಗೂ ಇಎಪಿ ಶಾಖೆಗಳಿಗೆ ಸಂಬಂಧಿಸಿದ ಕಾರ್ಯಗಳು | 22092566 (0)<br>22353965 (0) |
| 4 | ಕಾನೂನು ಕೋಶದ ಮುಖ್ಯಸ್ಥರು ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | ಕಾನೂನು ಕೋಶ ಶಾಖೆಗೆ ಸಂಬಂಧಿಸಿದ ಕಾರ್ಯಗಳು | 22200606 (0)<br>22092883 (0) |
| 5 | ಶ್ರೀಮತಿ ಗೀತಾ ರಮೇಶ್,<br>ಉಪಕಾರ್ಯದರ್ಶಿ (ಸೇವೆಗಳು) | ಲೋಕೋಪಯೋಗಿ, ಬಂದರು ಹಾಗೂ ವಾಸ್ತುಶಿಲ್ಪಿ, ಇಲಾಖೆಯ ಅಧಿಕಾರಿ ಹಾಗೂ ನೌಕರರ ಸೇವಾ ವಿಷಯಗಳು | 22353982 (0)<br>22092565 (0) |
| 6 | ಶ್ರೀ ಎ. ನಾಗೇಂದ್ರ,<br>ಉಪಕಾರ್ಯದರ್ಶಿ ಸಂಪರ್ಕ ಮತ್ತು ಕಟ್ಟಡಗಳು | ಬಂದರುಗಳು, ಕಟ್ಟಡಗಳು ಹಾಗೂ ಸಂಪರ್ಕ ಶಾಖೆಗಳಿಗೆ ಸಂಬಂಧಿಸಿದ ಕಾರ್ಯಗಳು | 22253659 (0)<br>22092648 (0) |
| 7 | ಆರ್. ಬಸವರಾಜು,<br>ಪ್ರಾಜೆಕ್ಟ್ ಕೋ-ಆರ್ಡಿನೇಟರ್,<br>ಬೆಂಗಳೂರು-ಮೈಸೂರು ವೇಗದ ರಸ್ತೆ. | ಬೆಂಗಳೂರು-ಮೈಸೂರು ವೇಗದ ರಸ್ತೆಗೆ ಸಂಬಂಧಪಟ್ಟ ವಿಷಯಗಳು | 22092202 (0) |
| 8 | ಆರ್. ಗೋವಿಂದರಾಜು,<br>ಆಂತರಿಕ ಆರ್ಥಿಕ ಸಲಹೆಗಾರರು,<br>ಎಂಟಿಎಫ್‌ಪಿ ಸೆಲ್ | ಆಡಿಟ್ ಕಂಡಿಕೆಗಳಿಗೆ ಅನುಸರಣಾ ವರದಿ ಆಯವ್ಯಯ, ಹಣ ಭರವಸೆ ಪತ್ರದ ವ್ಯವಹಾರಗಳು, ವಾರ್ಷಿಕ ವರದಿ ವಿಷಯ ಸಮಿತಿ, ಅಂದಾಜು ಸಮಿತಿ ವಿಷಯಗಳ ನಿರ್ವಹಣೆ. | 22092979 (0) |
| 9 | ಬಿ.ಎಂ. ಲಕ್ಷ್ಮೀನಾರಾಯಣ,<br>ಅಧೀನ ಕಾರ್ಯದರ್ಶಿ ಸೇವೆಗಳು-ಎ | ಅಧೀಕ್ಷಕ ಇಂಜಿನಿಯರ್, ಕಾರ್ಯಪಾಲಕ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳ ಸೇವಾ ಜೇಷ್ಠತೆ, ವರ್ಗಾವಣೆ, ಬಡ್ತಿ ಪ್ರತಿನಿಯೋಜನೆ, ಷರತ್ತು ಮತ್ತು ನಿಬಂಧನೆಗಳು, ರಜೆ, ಕಡ್ಡಾಯ ನಿರೀಕ್ಷಣಾ ಅವಧಿ, ಹುದ್ದೆಗೆ ನೇರ ನೇಮಕಾತಿ, ಸರ್ಕಾರಿ ನೌಕರರ ವಸತಿಗೃಹ ಹಂಚಿಕೆ, ವೃಂದ ಮತ್ತು ನೇಮಕಾತಿ ನಿಯಮಗಳು, ಹುದ್ದೆಗಳ ಸೃಷ್ಟಿ ಮುಂದುವರಿಕೆ ಮತ್ತು ರದ್ದುಪಡಿಸುವಿಕೆ, ನಿವೃತ್ತಿ ವೇತನ ಪ್ರಕರಣಗಳು ಹಾಗೂ ಸಮನ್ವಯ ಶಾಖೆಯ ಕಾರ್ಯಕಲಾಪಗಳು. | 22092019 (0) |
| 10 | ಎಂ. ವೆಂಕಟರಸಪ್ಪ,<br>ಅಧೀನ ಕಾರ್ಯದರ್ಶಿ, ಸೇವೆಗಳು-ಬಿ | ಸಹಾಯಕ ಇಂಜಿನಿಯರ್, ಕಿರಿಯ ಇಂಜಿನಿಯರ್‌ಗಳು ಮತ್ತು ಲಿಪಿಕ ನೌಕರರ ಸಿಬ್ಬಂದಿ ವರ್ಗಕ್ಕೆ ಸಂಬಂಧಪಟ್ಟ ನಿವೃತ್ತಿ ಸೌಲಭ್ಯ ಮತ್ತು ಇಲಾಖಾ ವಿಚಾರಣೆಯನ್ನು ಹೊರತುಪಡಿಸಿ ಸೇವಾ ವಿಷಯಗಳು, ನಿಬಂಧಕರ, ವಾಸ್ತುಶಿಲ್ಪಿಗಳಿಗೆ ಸಂಬಂಧಪಟ್ಟ ಸೇವಾ ವಿಷಯಗಳು, ವೈದ್ಯಕೀಯ ಭತ್ಯೆ ವಿಷಯಗಳು, ಸೆಮಿನಾರ್‌ಗಳು ಮತ್ತು ತರಬೇತಿ (ತಾಂತ್ರಿಕ ವಿಷಯಗಳೂ ಸೇರಿದಂತೆ) ಹಾಗೂ ಪ್ರಯಾಣ, ಸ್ನಾತಕೋತ್ತರ ವಿಷಯಗಳಿಗೆ ಅಧಿಕಾರಿಗಳನ್ನು ನೇಮಿಸುವ ಬಗ್ಗೆ. | 22092497 (0) |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪದನಾಮ | ಅವರು ನಿರ್ವಹಿಸುವ ವಿಷಯಗಳು | ದೂರವಾಣಿ ಸಂಖ್ಯೆ |
|---|---|---|---|
| | **ಶ್ರೀಯುತರು:** | | |
| 11 | ಎಸ್. ಚಂದ್ರಶೇಖರಪ್ಪ, ಅಧೀನ ಕಾರ್ಯದರ್ಶಿ, ಸೇವೆಗಳು-ಸಿ | ಎಲ್ಲಾ ನೌಕರರ ಹಾಗೂ ಅಧಿಕಾರಿಗಳ ಇಲಾಖಾ ವಿಚಾರಣೆಗಳು, ದಿನಗೂಲಿ ನೌಕರರ ಕರ್ಯಾಭೃತ ಸಿಬ್ಬಂದಿ ಇಲಾಖಾ ಮುಖ್ಯಸ್ಥರ ಪ್ರವಾಸ ವರದಿ. ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ, ಕಾರ್ಯನಿರ್ವಹಣಾ ವರದಿಗೆ ಸಂಬಂಧಿಸಿದ ವಿಷಯಗಳು, ಬಂದರು ಇಲಾಖೆಗೆ ಸಂಬಂಧಿಸಿದ ಸೇವಾ ವಿಷಯಗಳು, ಕರ್ನಾಟಕ ರಾಜ್ಯ ನಿರ್ಮಾಣ ನಿಗಮಕ್ಕೆ ಸಂಬಂಧಪಟ್ಟ ವಿಷಯಗಳು. | 22092260 (0) |
| 12 | ಎಂ.ಕೆ. ನರಸಿಂಹಲು, ಅಧೀನ ಕಾರ್ಯದರ್ಶಿ, ಕಟ್ಟಡಗಳು ಶಾಖೆ. | ಸರ್ಕಾರಿ ಕಟ್ಟಡಗಳ ನಿರ್ಮಾಣ, ಕಾಪಾಡುವಿಕೆ, ದುರಸ್ತಿ ಇತ್ಯಾದಿಗಳು ವಸತಿಗೃಹಗಳ ನಿರ್ಮಾಣ, ದುರಸ್ತಿ ಹಾಗೂ ಸರ್ಕಾರಿ ಜಮೀನು ವಿಲೇವಾರಿ. | 2092580 (0) |
| 13 | ಎನ್.ಎಸ್. ವಿಶ್ವನಾಥ್, ಅಧೀನ ಕಾರ್ಯದರ್ಶಿ, ಬಂದರುಗಳು ಶಾಖೆ | ರಾಜ್ಯ ಬಂದರುಗಳ ನಿರ್ಮಾಣ, ದುರಸ್ತಿ ಕಾಪಾಡುವಿಕೆ ಇತ್ಯಾದಿ ಹಾಗೂ ಸಮುದ್ರ ಕೊರೆತ ತಡೆಗೋಡೆಗಳ ಬಗೆಗಿನ ವಿಷಯಗಳ ನಿರ್ವಹಣೆ | 22092435 (0) |
| 14 | ಶೇಖ್ ಅಬ್ದುಲ್ ವಾಜೀದ್, ಅಧೀನ ಕಾರ್ಯದರ್ಶಿ, ಸಂಪರ್ಕ | ರಾಷ್ಟ್ರೀಯ ಹೆದ್ದಾರಿಗಳು, ನಿರ್ವಹಣೆ ಕೇಂದ್ರ ರಸ್ತೆ ನಿಧಿ ಯೋಜನೆ ಅಡಿಯಲ್ಲಿನ ಕಾಮಗಾರಿಗಳು, ರಾಜ್ಯ ಹೆದ್ದಾರಿಗಳು ಹಾಗೂ ಜಿಲ್ಲಾ ಮುಖ್ಯ ರಸ್ತೆಗಳು ಮಿಸಲೇನಿಯಸ್ ವಿಷಯಗಳು. | 22092409 (0)<br>22353979 (0) |
| 15 | ಆರ್. ಮಂಜುಳ, ಅಧೀನ ಕಾರ್ಯದರ್ಶಿ, ನಬಾರ್ಡ್ | ನಬಾರ್ಡ್ ಸಾಲ ಸಹಾಯಕ ಕಾಮಗಾರಿಗಳು, ದರಪಟ್ಟಿ ಹಾಗೂ ಕಾರ್ಯದರ್ಶಿಯವರು ನಿಗದಿಪಡಿಸಿದ ಇನ್ನುಳಿದ ತಾಂತ್ರಿಕ ವಿಷಯಗಳು, ಗುತ್ತಿಗೆದಾರರ ಬೆನವಲೆಂಟ್ ಫಂಡ್ ಪತ್ರ ವ್ಯವಹಾರ, ಕೆ.ಡಿ.ಸಿ. ಸಭೆ ಹಾಗೂ ಎಂ.ಎಂ.ಆರ್. ಸಭೆ. | 22092873 (0) |
| 16 | ಬಿ.ಎ. ವಿಜಯ, ಅಧೀನ ಕಾರ್ಯದರ್ಶಿ, ಇಎಪಿ | ವಿಶ್ವಬ್ಯಾಂಕ್, ಹುಡ್ಕೋ ಸಾಲದ ನೆರವಿನ ಯೋಜನೆಗಳು, KSHIP ಹಾಗೂ KRDCL ಗೆ ಸಂಬಂಧಿಸಿದ ವಿಷಯಗಳು. | 22092938 (0) |
| 17 | ಎಸ್.ಆರ್. ಪಾಟೀಲ್, ಅಧೀನ ಕಾರ್ಯದರ್ಶಿ, ಕಾನೂನು ಕೋಶ | ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಕರ್ನಾಟಕ ಉಚ್ಚ ನ್ಯಾಯಾಲಯ ಹಾಗೂ ಭಾರತದ ಸರ್ವೋಚ್ಚ ನ್ಯಾಯಾಲಯಗಳ ಮುಂದೆ ವ್ಯವಹರಿಸತಕ್ಕಂತಹ ವಿಷಯಗಳ ಬಗ್ಗೆ. | 22092882 (0)<br>25295555 (0) |

ಈ ಇಲಾಖೆಯ ಅಧಿಕಾರಿಗಳು ಮತ್ತು ನೌಕರರು ಸಚಿವಾಲಯದ ಕೈಪಿಡಿ ಮತ್ತು ಕಛೇರಿ ಕಾರ್ಯವಿಧಾನದಲ್ಲಿ ಹಾಗೂ ಸಂಬಂಧಿಸಿದ ನಿಯಮಗಳಲ್ಲಿ ವಿಧಿಸಲಾದ ಕಾರ್ಯವಿಧಾನಕ್ಕೆ ಅನುಸಾರವಾಗಿ ಕೆಲಸ ನಿರ್ವಹಿಸುತ್ತಾರೆ.

2. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, 2000ರ ಪ್ರಕರಣ 2 ಖಂಡ (ಎ), (ಸಿ) ಮತ್ತು ಪ್ರಕರಣ 7 ಗಳ ಪ್ರಕಾರ ಲೋಕೋಪಯೋಗಿ ಸಚಿವಾಲಯಕ್ಕೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಪ್ರಾಧಿಕಾರಗಳನ್ನು ಗೊತ್ತುಪಡಿಸಲಾಗಿದೆ.

| | | |
|---|---|---|
| ಪ್ರಕರಣ 2 ಖಂಡ (ಸಿ) | ಲೋಕೋಪಯೋಗಿ ಸಚಿವಾಲಯ, ಬಹುಮಹಡಿಗಳ ಕಟ್ಟಡ, 6ನೇ ಮಹಡಿ, ಬೆಂಗಳೂರು. | ಸಾರ್ವಜನಿಕ ಪ್ರಾಧಿಕಾರ |
| ಪ್ರಕರಣ 2 ಖಂಡ (ಎ) | ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ. | ಸಕ್ಷಮ ಪ್ರಾಧಿಕಾರ |
| ಪ್ರಕರಣ 7 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ. | ಅಪೀಲು ಪ್ರಾಧಿಕಾರ |

ಈ ಅಧಿನಿಯಮದ ಪ್ರಕಾರ ಮಾಹಿತಿ ಪಡೆಯಲು ಇಚ್ಛಿಸುವವರು ಮೇಲ್ಕಂಡ ಪ್ರಾಧಿಕಾರಗಳಲ್ಲಿ ನಿಯಮಾನುಸಾರ ಮನವಿ ಸಲ್ಲಿಸಿ ಮಾಹಿತಿ ಪಡೆಯಬಹುದಾಗಿದೆ.

**ಟಿ. ಸುಕುಮಾರ್**

ಪಿ.ಆರ್. 64 ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ.

## LABOUR SECRETARIAT

**NOTIFICATION No. LD 438 LSI 2004, Bangalore, dated: 15th February 2005**

In exercise of the powers conferred by Section 87 of the ESI Act (Central Act 34 of 1948) the Government of Karnataka hereby exempts M/s. Malnad Areca Marketing Co-op. Society Ltd., Shimoga from the operation of the said Act for a period of one year from the date of issue of this Notification.

By Order and in the name of the Governor of Karnataka,

**H. VISWANATH**

P.R. 70 Under Secretary to Government,
Labour Department (ESIS (M) Services).

## LAW SECRETARIAT

### NOTIFICATION No. LAW 123 LAC 2004, Bangalore, dated: 20th December 2004

In exercise of the powers conferred under section-8 of the Industrial Disputes Act 1947, (Act XIV of 1947) and as proposed by the Registrar General, High Court of Karnataka, Vide this letter No. GOB (I)/1/2004 dated: 16.11.2004. The Government of Karnataka hereby appoints the Presiding Officer of the Court of I Additional, District and Sessions Judge, Dharwad (Sitting at Hubli) as the Presiding Officer of the Labour Court and Additional Labour Court, Hubli, concurrently with immediate effect and until further orders.

By Order and in the name of the Governor of Karnataka,

**CHIKKAHANUMANTHAIAH**

P.R. 71 Under Secretary to Government, Law Department (Admn-I).

### NOTIFICATION No. LAW 08 LSM 2005, Bangalore, dated: 3rd February 2005

In exercise of the powers conferred under Rule 30 of the Karnataka Law Officers (Appointment and Conditions of Service) Rules, 1977 Sri Yoga Narasimha, Advocate is appointed as the Special Counsel to conduct the cases arising out of Contempt of court Cases (Civil) Nos.429-439 and 440-453/2004 before the Hon'ble High Court of Karnataka, Bangalore.

By Order and in the name of the Governor of Karnataka,

**K.G.V. MURTHY**

P.R. 72 II-Addl. Solicitor & Ex-Officio,

Deputy Secretary to Government, Law Department.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಆಕುಕ 121 ಸಿಜಿಎಂ 2005, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2005

ಕರ್ನಾಟಕ ಧೂಮಪಾನ ನಿಷೇಧ ಮತ್ತು ಧೂಮಪಾನಗಳಲ್ಲದವರ ಆರೋಗ್ಯ ರಕ್ಷಣೆ ಅಧಿನಿಯಮ, 2001 (2003ರ ಕರ್ನಾಟಕ ಅಧಿನಿಯಮ 2)ರ 6ನೇ ಪ್ರಕರಣದ (1)ನೇ ಉಪ-ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ, ಈ ಕೆಳಗಿನ ಕೋಷ್ಟಕರು (2)ನೇ ಅಂಕಣದಲ್ಲಿ ನಮೂದಿಸಲಾದ ಅಧಿಕಾರಗಳನ್ನು, ಅದರ (3)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಪ್ರದೇಶಗಳ ಸಂಬಂಧದಲ್ಲಿ ಅಧಿಕೃತ ಅಧಿಕಾರಿ ಎಂದು ನೇಮಿಸುತ್ತದೆ.

**ಕೋಷ್ಟಕ**

| ಕ್ರ.ಸಂ. | ಅಧಿಕಾರಿಯ ಪದನಾಮ | ಪ್ರದೇಶ |
|---|---|---|
| 1 | ರಾಜ್ಯದಲ್ಲಿನ ಕೆ.ಎಸ್.ಆರ್.ಟಿ.ಸಿ. ವ್ಯವಸ್ಥಾಪಕ ನಿರ್ದೇಶಕರು : ಜಿಲ್ಲಾ ಕೆ.ಎಸ್.ಆರ್.ಟಿ.ಸಿ. ವಿಭಾಗಾಧಿಕಾರಿ | ಅವರಿಗೆ ಸಂಬಂಧಪಟ್ಟ ಅಧಿಕಾರ ವ್ಯಾಪ್ತಿಯೊಳಗೆ |
| 2 | ಆಯುಕ್ತರು, ಸಾರ್ವಜನಿಕ ಶಿಕ್ಷಣ : ಜಿಲ್ಲಾ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ | ಅವರಿಗೆ ಸಂಬಂಧಪಟ್ಟ ಅಧಿಕಾರ ವ್ಯಾಪ್ತಿಯೊಳಗೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಶಂಕರ್**

ಪಿ.ಆರ್. 74 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಇಂಧನ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಇಎನ್ 8 ಪಿಎಸ್ಆರ್ 2005 (ಪಿ), ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2005

ಶ್ರೀ ವಿಜಯನರಸಿಂಹ, ಮುಖ್ಯ ಇಂಜಿನಿಯರ್ (ಪ್ರಸರಣ), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು, ಇವರನ್ನು ಮೈಸೂರಿನ ಮೆ: ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ಸಂಸ್ಥಾನಿವೇದನಾ ಹಾಗೂ ಸಂಘ ನಿಯಮಾವಳಿ ಪತ್ರದ ಆರ್ಟಿಕಲ್ 72(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೆ: ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಮೆ: ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ಸಂಸ್ಥಾ ನಿವೇದನಾ ಹಾಗೂ ಸಂಘ ನಿಯಮಾವಳಿ ಪತ್ರದ ಆರ್ಟಿಕಲ್ 72(ಬಿ) ಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವಿಜಯನರಸಿಂಹ, ಮುಖ್ಯ ಇಂಜಿನಿಯರ್ (ಪ್ರಸರಣ), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು, ಇವರನ್ನು ಮೈಸೂರಿನ ಮೆ: ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 75 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಆರ್ಥಿಕ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಆಇ 9 ಸಿಎಎಕ್ಸ್ 2004, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2005

ಕರ್ನಾಟಕ ಕೃಷಿ ವರಮಾನ ತೆರಿಗೆ ಕಾಯ್ದೆ 1957ರ ಪ್ರಕರಣ 12ರ ಉಪ ಪ್ರಕರಣ (ಜಿ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸದರಿ ಉಪ ಪ್ರಕರಣದಲ್ಲಿ ಹೇಳಲಾಗಿರುವ ಉದ್ದೇಶಕ್ಕಾಗಿ ಮೆ: ಮಲೆನಾಡು ವಯೋವೃದ್ಧರ ಆಶ್ರಯ ಸಮಿತಿ, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ ಇವರ ನಿಧಿಗೆ ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಕರ್ನಾಟಕ ಕೃಷಿ ವರಮಾನ ತೆರಿಗೆ ನಿಯಮಗಳು, 1957ರ, ನಿಯಮ 5ಎ ರಲ್ಲಿನ ಷರತ್ತುಗಳಿಗೊಳಪಟ್ಟು ಮಾನ್ಯತೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಎನ್. ನಾಗೇಂದ್ರ**

ಪಿ.ಆರ್. 76 ಪೀಠಾಧಿಕಾರಿ, ಆರ್ಥಿಕ ಇಲಾಖೆ (ವಾ.ತೆ-1).